ಸದನದಲ್ಲಿ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು
ನೂರ ನಲವತ್ತಮೂರನೆಯ ಅಧಿವೇಶನ
ಬುಧವಾರ, ದಿನಾಂಕ : 03 ನೇ ಫೆಬ್ರುವರಿ, 2021

ಕೊಡಗು ಜಿಲ್ಲೆಯಲ್ಲಿ ಅಕಾಲಿಕ ಮಳೆಯಿಂದ ಭತ್ತದ ಕೊಯ್ಲು ಹಾಳಾಗಿರುವ ಕುರಿತು

ಶ್ರೀಮತಿ ಎಸ್. ವೀಣಾ ಅಚ್ಚಯ್ಯ (ವಿಧಾನಸಭೆಯಿಂದ ಚುನಾಯಿತರಾದವರು) :-

309 (342) ಮಾನ್ಯ ಕೃಷಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕೊಡಗು ಜಿಲ್ಲೆಯಲ್ಲಿ, ಈ ವರ್ಷ ಭತ್ತದ ಕೊಯ್ಲಿನ ಸಂದರ್ಭದಲ್ಲಿ ಅಕಾಲಿಕ ಮಳೆ ಸುರಿದು, ಭತ್ತದ ಕೊಯ್ಲು ಸಾಕಷ್ಟು ಹಾಳಾಗಿರುವುದರಿಂದ, ರೈತರು ತೀವ್ರ ಸಂಕಷ್ಟಕ್ಕೆ ಸಿಲುಕಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಬಂದಿದ್ದಲ್ಲಿ, ಪ್ರಸ್ತುತ ವರ್ಷದಲ್ಲಿ ಕೊಡಗು ಜಿಲ್ಲೆಯಲ್ಲಿ ಎಷ್ಟು ವಿಸ್ತೀರ್ಣದ ಭತ್ತದ ಕೊಯ್ಲು ಹಾನಿಗೊಳಗಾಗಿದೆ ಹಾಗೂ ಸದರಿ ನಷ್ಟದ ಅಂದಾಜಿನ ಸಂಪೂರ್ಣ ವಿವರಗಳೇನು;

(ಇ) ಈ ಕಾರಣದಿಂದ ಆರ್ಥಿಕ ಸಂಕಷ್ಟದಲ್ಲಿರುವ ರೈತರಿಗೆ ಸರ್ಕಾರ ಕಲ್ಪಿಸಲಿರುವ ತಕ್ಷಣದ ಪರಿಹಾರ, ನೆರವು ಹಾಗೂ ಸೌಲಭ್ಯಗಳೇನು; (ಸಂಪೂರ್ಣ ವಿವರ ನೀಡುವುದು)

(ಈ) ಸಂಕಷ್ಟದಲ್ಲಿರುವ ರೈತರಿಗೆ ಕೂಡಲೇ ನೆರವಾಗುವ ದೃಷ್ಟಿಯಿಂದ, ಬೆಂಬಲ ಬೆಲೆ ನೀಡುವ ಮೂಲಕ ಈ ವರ್ಷದ ಸಂಪೂರ್ಣ ಭತ್ತದ ಫಸಲನ್ನು ಖರೀದಿ ಮಾಡಲು ಸರ್ಕಾರ ಕ್ರಮ ವಹಿಸುವುದೇ?